ನವಸಾಕ್ಷರ ಪುಸ್ತಕ ಮಾಲೆ ೩೦

# ಬೆಂಗಳೂರು

ಕೆ. ಪುಟ್ಟಸ್ವಾಮಿ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ
ನವಸಾಕ್ಷರ ಪುಸ್ತಕ ಮಾಲೆ-೩೦

# ಬೆಂಗಳೂರು

ಕೆ. ಪುಟ್ಟಸ್ವಾಮಿ




ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೭




**BENGALOORU** : By K. Puttaswamy. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. ii + 26, Rs. 8.00

---






**ಸಂಯೋಜನಾಧಿಕಾರಿ**
ಎಚ್. ಎಸ್. ಶ್ರೀಮತಿ
ಪಠ್ಯಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ ೮.೦೦**

**ಮುದ್ರಕರು**
ಪ್ರಿಂಟ್‌ಪ್ಯಾಕ್
ದೇವಯಾನಿ ಇಂಡಸ್ಟ್ರಿಯಲ್ ಕಾಂಪ್ಲೆಕ್ಸ್, ೨೮/೨, ಗೌಡನಪಾಳ್ಯ,
ಸುಬ್ರಹ್ಮಣ್ಯಪುರ ರಸ್ತೆ, ಬೆಂಗಳೂರು-೫೬೦ ೦೬೧.

# ಬೆಂಗಳೂರು

ಬೆಂಗಳೂರು ನಮ್ಮ ರಾಜ್ಯದ ರಾಜಧಾನಿ. ಅತಿ ವೇಗದಲ್ಲಿ ಬೆಳೆಯುತ್ತಿರುವ ನಗರಗಳ ಪೈಕಿ ಮುಂದಿದೆ. ಇದು ರಾಜ್ಯದ ಸಾಂಸ್ಕೃತಿಕ ಮತ್ತು ಕೈಗಾರಿಕಾ ಕೇಂದ್ರವೆನಿಸಿದೆ. ವಿಸ್ತಾರ ಮತ್ತು ಜನ ಸಂಖ್ಯೆಯಲ್ಲಿ ಇದು ದೇಶದ ಆರನೇ ದೊಡ್ಡ ನಗರ.

ಒಂದು ಗ್ರಾಮ ಅಥವಾ ಪಟ್ಟಣ ನಗರವಾಗಿ ಬೆಳೆಯಲು ಅನೇಕ ಅಂಶಗಳು ಕಾರಣವಾಗುತ್ತವೆ. ಅಲ್ಲಿ ಹವೆ ಉತ್ತಮವಾಗಿರಬೇಕು. ವ್ಯಾಪಾರ ವಹಿವಾಟಿಗೆ ಅನುಕೂಲವಿರಬೇಕು. ಅದು ಅಧಿಕಾರದ ಕೇಂದ್ರಸ್ಥಾನವಾಗಿರಬೇಕು. ಕೈಗಾರಿಕೆ ಬೆಳೆಯಲು ಉತ್ತೇಜನ ದೊರೆಯಬೇಕು. ಒಳ್ಳೆಯ ಸಾರಿಗೆ ವ್ಯವಸ್ಥೆ ಇರಬೇಕು. ಬೇರೆ ಬೇರೆ ಕಸುಬು ಮಾಡುವ ಜನರನ್ನು ಸೆಳೆಯಬೇಕು. ನಾಗರಿಕ ಸವಲತ್ತುಗಳು ದೊರೆಯಬೇಕು. ಹೊಸ ಹೊಸ ಬದಲಾವಣೆಗಳನ್ನು ಅರಗಿಸಿಕೊಳ್ಳಬೇಕು. ಬೆಂಗಳೂರಿಗೆ ಈ ಎಲ್ಲಾ ಗುಣಗಳು ಇವೆ. ಆದುದರಿಂದಲೇ ಅದು ದೊಡ್ಡ ನಗರವಾಗಿ ಬೆಳೆಯುತ್ತಿದೆ.

ಬೆಂಗಳೂರು ನಗರವು, ಬೆಂಗಳೂರು ಜಿಲ್ಲೆಯ ಮಧ್ಯಭಾಗದಲ್ಲಿದೆ. ಇದು ದಕ್ಷಿಣ ಪಿನಾಕಿನಿ ಮತ್ತು ಅರ್ಕಾವತಿ ನದಿಗಳನ್ನು ಬೇರೆ ಮಾಡುವ ಉಬ್ಬು ಭೂಮಿಯ ಮೇಲಿದೆ. ಮೈಸೂರಿಗೆ ನೂರ ನಲವತ್ತು ಕಿಲೋಮೀಟರ್ ದೂರದಲ್ಲಿದೆ. ಬೆಂಗಳೂರಿನ ಕೇಂದ್ರ ಭಾಗ ನಗರ ಪಾಲಿಕೆಯ ವಶದಲ್ಲಿದೆ. ಹೊಸ ಬಡಾವಣೆಗಳನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ

ರೂಪಿಸಿದೆ. ಬೆಂಗಳೂರಿಗೆ ಅಂಟಿಕೊಂಡಂತೆ ಉಪನಗರಗಳೂ ಇವೆ. ಇವೆಲ್ಲವೂ ಸೇರಿದಂತೆ ಬೆಂಗಳೂರು ಸುಮಾರು ಇನ್ನೂರು ಚದರ ಕಿಲೋಮೀಟರ್ ಪ್ರದೇಶದಲ್ಲಿ ಹರಡಿಕೊಂಡಿದೆ. ಇಲ್ಲಿನ ಜನಸಂಖ್ಯೆ ನಲವತ್ತು ಲಕ್ಷವನ್ನು ದಾಟಿದೆ.

ಬೆಂಗಳೂರು ಆರಂಭದಿಂದಲೂ ಬೆಳೆಯುತ್ತಲೇ ಇರುವ ನಗರ. ಇಲ್ಲಿ ಬಗೆ ಬಗೆಯ ಕಟ್ಟಡಗಳಿವೆ. ಸೊಬಗಿನ ಉದ್ಯಾನವನಗಳಿವೆ. ವಿಶಾಲವಾದ ರಸ್ತೆಗಳಿವೆ. ಇತಿಹಾಸವನ್ನು ಸಾರುವ ಕಟ್ಟಡಗಳು ಹೇರಳವಾಗಿವೆ. ಬೇರೆ ಬೇರೆ ಧರ್ಮಕ್ಕೆ ಸೇರಿದವರಿದ್ದಾರೆ. ಬೇರೆ ಬೇರೆ ಭಾಷೆಗಳನ್ನು ಮಾತನಾಡುವ ಜನರು ಇದ್ದಾರೆ. ಇವರು ಶಾಂತಿ ಸೌಹಾರ್ದತೆಯಿಂದ ಬಾಳುತ್ತಿದ್ದಾರೆ.

## ಇತಿಹಾಸ

ಬೆಂಗಳೂರಿನ ಹಿನ್ನೆಲೆಗೆ ಭವ್ಯವಾದ ಇತಿಹಾಸವಿದೆ. ಉತ್ತಮ ಪರಂಪರೆಯಿದೆ. ಒಂದು ಕಾಲದಲ್ಲಿ ಭದ್ರವಾದ ಕೋಟೆ ಬೆಂಗಳೂರನ್ನು ರಕ್ಷಿಸಿತ್ತು. ಈಗ ಅದು ಕಾಲನ ಹಿಡಿತಕ್ಕೆ ಸಿಕ್ಕಿ ನಶಿಸಿದೆ. ಆದರೆ ಕೆಂಪೇಗೌಡನ ಗೋಪುರಗಳು, ಟಿಪ್ಪುವಿನ ಅರಮನೆ, ಲಾಲ್‌ಬಾಗ್, ಕಬ್ಬನ್ ಪಾರ್ಕ್, ದೇವಾಲಯಗಳು, ಮಸೀದಿ-ಚರ್ಚುಗಳು ಈ ನಗರದ ಇತಿಹಾಸವನ್ನು ಸದಾ ನೆನಪಿಸುತ್ತಿವೆ. ಇಲ್ಲಿ ಅನೇಕ ಘಟನೆಗಳು ನಡೆದಿವೆ. ರಾಜಕೀಯ ಏಳು-ಬೀಳುಗಳಾಗಿವೆ. ರಾಜರ ಉನ್ನತಿ ಮತ್ತು ಪತನಗಳಾಗಿವೆ. ಇವೆಲ್ಲಕ್ಕೂ ಬೆಂಗಳೂರು ಸಾಕ್ಷಿಯಾಗಿ ನಿಂತಿದೆ.

ಬೆಂಗಳೂರು ಬಹಳ ಹಳೆಯದು. ಇದು ಮೊದಲಿನಿಂದಲೂ ರಾಜರ ಗಮನವನ್ನು ಸೆಳೆದ ಸ್ಥಳ. ಬೆಂಗಳೂರಿನ ಹುಟ್ಟಿಗೆ ಸಂಬಂಧಿಸಿದಂತೆ ಅನೇಕ ದಂತ ಕತೆಗಳು ಇವೆ. ಇವುಗಳಲ್ಲಿ ಹೊಯ್ಸಳ ರಾಜ ವೀರಬಲ್ಲಾಳನಿಗೆ ಸಂಬಂಧಿಸಿರುವ ಕತೆ ಹೆಚ್ಚು ಜನಪ್ರಿಯವಾಗಿದೆ. ಆತ ಸುಮಾರು ಎಂಟು ನೂರು ವರ್ಷಗಳ ಹಿಂದೆ ಬದುಕಿದ್ದ. ಒಮ್ಮೆ ಬೇಟೆಯಾಡುತ್ತಾ ಈ ಸ್ಥಳಕ್ಕೆ ಬಂದ. ಬೇಟೆ ಸಿಗದೆ ಬಳಲಿದ-ಹಸಿವಿನಿಂದ ಕಂಗಾಲಾಗಿದ್ದ ಬಲ್ಲಾಳನಿಗೆ ಒಂಟಿ ಗುಡಿಸಲೊಂದು ಕಾಣಿಸಿತು. ಅಲ್ಲಿದ್ದ ಮುದುಕಿಯೊಬ್ಬಳು ತನ್ನಲ್ಲಿದ್ದ ಬೆಂದಕಾಳುಗಳನ್ನು ನೀಡಿ ರಾಜನ ಹಸಿವು ನೀಗಿಸಿದಳು. ಮುದುಕಿಯ ಉಪಚಾರದಿಂದ ರಾಜ ಸಂತೋಷಗೊಂಡ. ಅವಳ ನೆನಪಿಗಾಗಿ ಒಂಟಿ ಗುಡಿಸಲು ಇದ್ದ ಕಡೆ ಊರು ಕಟ್ಟಿಸಿದ. ತಾನು ತಿಂದ ಕಾಳಿನ ನೆನಪಿಗಾಗಿ ಊರಿಗೆ 'ಬೆಂದಕಾಳೂರು' ಎಂದು ಹೆಸರಿಟ್ಟ. ಮುಂದೆ ಅದು ಜನರ ಬಾಯಲ್ಲಿ 'ಬೆಂಗಾಳೂರು' ಆಗಿ ಕೊನೆಗೆ 'ಬೆಂಗಳೂರು' ಆಯಿತು. ಇದು ಕತೆ. ಬೆಂಗಳೂರಿನ ಬಳಿ ಬೇಗೂರು ಎಂಬ ಊರಿದೆ. ಅಲ್ಲಿ ಒಂಬೈನೂರು



ಬೆಂಗಳೂರ ಸ್ಥಾಪಕ ಕೆಂಪೇಗೌಡ

ವರ್ಷಗಳ ಹಿಂದಿನ ಶಾಸನವಿದೆ. ಅದರಲ್ಲಿ ಬೆಂಗಳೂರಿನ ಹೆಸರಿದೆ. ಆದುದರಿಂದ ವೀರಬಲ್ಲಾಳನ ಕಾಲಕ್ಕಿಂತಲೂ ಎಷ್ಟೋ ಹಿಂದಿನಿಂದಲೂ ಬೆಂಗಳೂರು ಇತ್ತು ಎನ್ನಲೂಬಹುದು.

## ಮೊದಲ ಕೆಂಪೇಗೌಡ

ಬೆಂಗಳೂರು ಮಹಾನಗರವಾಗಲು ಅಸ್ತಿಭಾರ ಹಾಕಿದವನು ಮೊದಲ ಕೆಂಪೇಗೌಡ. ಈ ನಗರವನ್ನು ಅವನು ಏಕೆ ಕಟ್ಟಿದ ಎನ್ನುವುದಕ್ಕೆ ಒಂದು ಕತೆ ಇದೆ. ಸುಮಾರು ನಾಲ್ಕು ನೂರು ವರ್ಷಗಳ ಹಿಂದೆ ಕೆಂಪೇಗೌಡ ಯಲಹಂಕನಾಡಿನ ಪಾಳೆಯಗಾರನಾಗಿದ್ದ. ಒಮ್ಮೆ ಬೇಟೆಯಾಡುತ್ತಾ ಅವನು ಈ ಜಾಗಕ್ಕೆ ಬಂದ. ಮೊಲವೊಂದು ಬೇಟೆ ನಾಯಿಯ ವಿರುದ್ಧ ತಿರುಗಿಬಿತ್ತು. ಇದನ್ನು ಕಂಡು ಕೆಂಪೇಗೌಡ ಇದು'ಗಂಡು ಭೂಮಿ' ಎಂದು ಭಾವಿಸಿದ. ಅದಕ್ಕಾಗಿ ಅಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿದನಂತೆ. ಸುತ್ತ ಮಣ್ಣಿನ ಕೋಟೆಯನ್ನು ಕಟ್ಟಿಸಿದನಂತೆ. ಇದು ನಿಜವೋ ಸುಳ್ಳೋ ಸರಿಯಾಗಿ ತಿಳಿಯದು.

ಕೆಂಪೇಗೌಡ ಸುಮಾರು, ಐವತ್ತು ವರ್ಷಗಳಕಾಲ ತನ್ನ ಪಾಳೆಯವನ್ನು ಆಳಿದ. ಅವನು ತುಂಬಾ ಉತ್ಸಾಹಿ. ಒಳ್ಳೆಯ ಕನಸುಗಾರ. ಜೊತೆಗೆ ದೊಡ್ಡ ಕೆಲಸಗಾರ. ಇದಕ್ಕೆ ಅವನು ಬೆಂಗಳೂರು ಕಟ್ಟಿದ್ದೇ ಸಾಕ್ಷಿ. ಇಂಥ ದೊಡ್ಡ ಕೆಲಸಗಾರನ ಬಗ್ಗೆ ಹೆಚ್ಚು ಮಾಹಿತಿ ದೊರಕಿಲ್ಲ. ಕೆಲವು ಶಾಸನಗಳಲ್ಲಿ ದೊರೆತಿರುವ ಮಾಹಿತಿ ಆಧರಿಸಿ ಚರಿತ್ರೆಕಾರರು ಅವನ ಕತೆಯನ್ನು ಊಹಿಸಿದ್ದಾರೆ. ಅದು ಹೀಗಿದೆ.

ರಣ ಭೈರವೇಗೌಡ ಒಬ್ಬ ಪಾಳೆಯಗಾರ. ಅವನು 'ಆವಂತಿ ನಾಡ ಪ್ರಭು' ಎಂದು ಹೆಸರಾಗಿದ್ದ. ಅವನ ಮಗನೇ ಜಯಗೌಡ. ಇವನು 'ಯಲಹಂಕ ನಾಡ ಪ್ರಭು' ಎಂದು ಹೆಸರಾಗಿದ್ದ. ಕೆಂಪೇಗೌಡ ಈ ವಂಶದವನು. ನಾಲ್ಕುನೂರು ವರ್ಷಗಳ ಹಿಂದೆ ಕೆಂಪೇಗೌಡ ಪಟ್ಟಕ್ಕೆ ಬಂದ. ಅನಂತರ ಆತ ತನ್ನ ಪಾಳೆಯವನ್ನು ದೊಡ್ಡದು ಮಾಡಿದ. ಜೊತೆಗೆ ಜನಹಿತ ಕೆಲಸಗಳನ್ನು ಕೈಗೊಂಡ. ಕೆರೆಗಳನ್ನು ಕಟ್ಟಿಸಿದ. ಬಾವಿ-ಕಾಲುವೆಗಳನ್ನು ತೋಡಿಸಿದ. ಕಾಡನ್ನು ಕಡಿಸಿ ಬೇಸಾಯಕ್ಕೆ ಒತ್ತಾಸೆ ನೀಡಿದ. ಇವನ ಈ ಜನಹಿತ ಕೆಲಸಗಳನ್ನು ಕಂಡು ವಿಜಯನಗರದ ಅರಸರು ಮೆಚ್ಚುಗೆ ತೋರಿದರು.

ಕೆಂಪೇಗೌಡನ ಕನಸು ಪೂರ್ಣಗೊಂಡದ್ದು ಬೆಂಗಳೂರು ಕಟ್ಟಿದ ಮೇಲೆ. ಪೇಟೆಗಳು, ದೇವಸ್ಥಾನ, ಕೋಟೆ, ಛತ್ರಗಳು ಮತ್ತು ವಿಶಾಲ ರಸ್ತೆಗಳಿರುವ ನಗರ ಕಟ್ಟುವುದು ಅವನ ಕನಸಾಗಿತ್ತು. ಈಗ ಬೆಂಗಳೂರಿರುವ ಜಾಗ ಆಗ ಕಾಡಾಗಿತ್ತು. ಆ ಜಾಗದಲ್ಲಿ ಇದ್ದ

ಮರಗಿಡಗಳನ್ನು ತೆಗೆಸಿದ. ತನ್ನ ಕನಸಿನ ಬೆಂಗಳೂರನ್ನು ಕಟ್ಟಲು ಆರಂಭಿಸಿದ. ಅದರಂತೆ ಈಗಿನ ದೊಡ್ಡಪೇಟೆ ಚೌಕದಿಂದ ಬೆಂಗಳೂರು ನಗರ ನಿರ್ಮಾಣ ಆರಂಭವಾಯಿತು. ನಗರ ನಿರ್ಮಾಣದ ನಂತರ ಸುತ್ತ ಮಣ್ಣಿನ ಕೋಟೆ ಕಟ್ಟಿಸಿದ. ಮುಂದೆ ತನ್ನ ರಾಜಧಾನಿಯನ್ನು ಯಲಹಂಕದಿಂದ ಬೆಂಗಳೂರಿಗೆ ಬದಲಾಯಿಸಿದ. ಕೆಂಪೇಗೌಡನು ಕಟ್ಟಿಸಿದ ಕೋಟೆ ತುಂಬಾ ವಿಶಾಲವಾಗಿತ್ತು. ಅದಕ್ಕೆ ಎಂಟು ದೊಡ್ಡ ಕಲ್ಲಿನ ಬಾಗಿಲುಗಳಿದ್ದವು. ಪೂರ್ವದಲ್ಲಿ ಅಲಸೂರು ಬಾಗಿಲು ಮತ್ತು ದಕ್ಷಿಣದಲ್ಲಿ ಕೆಂಗೇರಿ ಬಾಗಿಲು, ಉತ್ತರದಲ್ಲಿ ಯಲಹಂಕದ ಬಾಗಿಲು ಮತ್ತು ದಕ್ಷಿಣದಲ್ಲಿ ಆನೇಕಲ್ಲು ಬಾಗಿಲು. ಇವುಗಳನ್ನು ಈಗಲೂ ನಾವು ಗುರುತಿಸಬಹುದು.

ಕೆಂಪೇಗೌಡ ಬೇರೆ ಬೇರೆ ಕಸಬುದಾರರನ್ನು ನಾನಾ ಮೂಲೆಗಳಿಂದ ಕರೆಸಿದ. ಬೆಂಗಳೂರಿನಲ್ಲಿ ಅನೇಕ ಪೇಟೆಗಳನ್ನು ಕಟ್ಟಿಸಿ ನೆಲೆಗೊಳಿಸಿದ. ಈಗ ನಗರದ ಮಧ್ಯಭಾಗದಲ್ಲಿರುವ ಅಕ್ಕಿಪೇಟೆ, ಬಳೇಪೇಟೆ, ಚಿಕ್ಕಪೇಟೆ, ತರಗುಪೇಟೆ, ನಗರ್ತರ ಪೇಟೆ, ಅರಳೇ ಪೇಟೆ ಮುಂತಾದವುಗಳನ್ನು ವಿವಿಧ ಕಸಬುಗಳ ಜನರು ವಾಸವಾಗಿದ್ದ ಪೇಟೆಗಳಾಗಿದ್ದವು. ಜೊತೆಗೆ ಆಯಾ ಸರಕುಗಳ ವ್ಯಾಪಾರ ಕೇಂದ್ರಗಳೂ ಆಗಿದ್ದವು.

ಕಳೆದ ನೂರು ವರ್ಷಗಳಲ್ಲಿ ಈ ನಗರ ಮಿತಿಯಿಲ್ಲದೆ ಬೆಳೆದಿದೆ. ಇದು ಬೆಳೆಯಬಹುದಾದ ಗಡಿಯನ್ನು ಸೂಚಿಸಲು ಕೆಂಪೇಗೌಡ ನಾಲ್ಕು ದಿಕ್ಕುಗಳಲ್ಲೂ ಗೋಪುರಗಳನ್ನು ಕಟ್ಟಿಸಿದ. ಉತ್ತರದಲ್ಲಿ ವೈಯಾಳಿಕಾವಲ್ ದಿಬ್ಬದ ಮೇಲೆ, ದಕ್ಷಿಣದಲ್ಲಿ ಲಾಲ್‌ಬಾಗ್ ಬಳಿ, ಪೂರ್ವದಲ್ಲಿ ಅಲಸೂರು ಬಳಿ ಮತ್ತು ಪಶ್ಚಿಮದಲ್ಲಿ ಕೆಂಪೇಗೌಡ ನಗರದ ಬಳಿ ಈಗಲೂ ಅವು ನಿಂತಿವೆ. ಆದರೆ, ಈ ಗಡಿಗಳನ್ನು ಮೀರಿ ಬೆಂಗಳೂರು ಬೆಳೆದು ಬಹಳ ದಿನಗಳಾಗಿವೆ. ಒಂದು ಕಾಲದಲ್ಲಿ ನಗರದ ಎಲ್ಲೆಗಳಾಗಿದ್ದ ಈ ಗೋಪುರಗಳು ಇಂದು ನಗರದ ನಡುಭಾಗಕ್ಕೇ ಬಂದಿವೆ.

ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ಶ್ರೀಮಂತವಾಯಿತು. ಬೇರೆ ಬೇರೆ ಕಸುಬುದಾರರಿಂದ ವ್ಯಾಪಾರ ವಹಿವಾಟು ಹೆಚ್ಚಾಯಿತು. ಈ ಉನ್ನತಿಯನ್ನು ಆಗ ಚನ್ನಪಟ್ಟಣದಲ್ಲಿ ಪಾಳೆಯಗಾರನಾಗಿದ್ದ ಜಗದೇವರಾಯನಿಗೆ ಸಹಿಸಲಾಗಲಿಲ್ಲ. ಆತ ವಿಜಯನಗರದ ಅರಸರ ಅಳಿಯ ರಾಮರಾಯನ ಜೊತೆ ಸಂಚು ಹೂಡಿದ. ರಾಮರಾಯ ಕೆಂಪೇಗೌಡನಿಗೆ ಕರೆಕಳುಹಿಸಿದ. ಆಹ್ವಾನವನ್ನು ಮನ್ನಿಸಿ ಬಂದ ಕೆಂಪೇಗೌಡನನ್ನು ಸೆರೆಹಿಡಿದ. ಐದು ವರ್ಷಗಳ ಕಾಲ ಕೆಂಪೇಗೌಡ ಆನೆಗೊಂದಿಯ ಬಂದೀಖಾನೆಯಲ್ಲಿದ್ದ. ಅನಂತರ ಬಿಡುಗಡೆಯಾಗಿ ಮತ್ತೆ ಬೆಂಗಳೂರಿಗೆ ಬಂದು ಅಧಿಕಾರವಹಿಸಿಕೊಂಡ. ಮತ್ತೆ ಜನಹಿತ



ತಾರಾಮಂಡಲ್ ಸಂಗೀನ್ ಜಮ್ಮಾ ಮಸೀದಿ

ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡ. ಬೆಂಗಳೂರಿನ ಗವಿಗಂಗಾಧರೇಶ್ವರ ಸ್ವಾಮಿ ದೇವಸ್ಥಾನ, ಬಸವಣ್ಣನ ಗುಡಿ, ಕೆಂಪಾಂಬುಧಿ ಮತ್ತು ಧರ್ಮಾಂಬುಧಿ ಕೆರೆಗಳನ್ನು ಕಟ್ಟಿಸಿದ.

ಕೆಂಪೇಗೌಡನ ನಂತರ ಅವನ ಮಗ ಇಮ್ಮಡಿ ಕೆಂಪೇಗೌಡ ಅಧಿಕಾರಕ್ಕೆ ಬಂದ. ಇವನು ಬೆಂಗಳೂರಿನ ಸಂಪತ್ತು ಮತ್ತು ವೈಭವವನ್ನು ಮತ್ತಷ್ಟು ಹೆಚ್ಚಿಸಿದ. ರಂಗನಾಥ ದೇವಾಲಯ, ಕೆಂಪಾಪುರ ಅಗ್ರಹಾರದ ಕೆರೆ, ಸಂಪಂಗಿ ಕೆರೆ ಮತ್ತು ಕಾರಂಜಿ ಕೆರೆಗಳನ್ನು ಆತ ಕಟ್ಟಿಸಿದ.

ಬೆಂಗಳೂರು ಶ್ರೀಮಂತವಾಗಿತ್ತು; ಮುನ್ನಡೆ ಸಾಧಿಸಿತ್ತು. ಸಹಜವಾಗಿ ಇತರ ರಾಜರ ಕಣ್ಣು ಅದರ ಮೇಲಿತ್ತು. ಸುಮಾರು ಸಾವಿರದ ಆರುನೂರ ಐವತ್ತರಲ್ಲಿ ಬಿಜಾಪುರದ ದಂಡನಾಯಕ ರಣದುಲ್ಲಾ ಖಾನ್ ದಂಡೆತ್ತಿ ಬಂದ. ಯುದ್ಧದಲ್ಲಿ ಇಮ್ಮಡಿ ಕೆಂಪೇಗೌಡ ಸೋತ. ಬಿಜಾಪುರದ ಸುಲ್ತಾನ ತಾನು ಗೆದ್ದ ಬೆಂಗಳೂರನ್ನು ಶಿವಾಜಿಯ ತಂದೆ ಶಹಾಜಿಗೆ ಜಹಗೀರಾಗಿ ನೀಡಿದ. ಶಹಾಜಿ ಬೆಂಗಳೂರಿನ ಸುಬೇದಾರನಾಗಿ ಬಂದ. ಶಹಾಜಿಯು ಸತ್ತ ನಂತರ ಬೆಂಗಳೂರು ಅವನ ಇನ್ನೊಬ್ಬ ಮಗ ವೆಂಕಾಜಿಯ ವಶವಾಯಿತು. ಬೆಂಗಳೂರನ್ನು ಮಾರಲು ವೆಂಕಾಜಿ ನಿರ್ಧರಿಸಿದ. ಮೈಸೂರಿನ ದೊರೆ ಚಿಕ್ಕದೇವರಾಜ ಕೊಳ್ಳಲು ಮುಂದೆ ಬಂದ.

ಶಿವಾಜಿ ಬಾಲ್ಯದ ತನ್ನ ಹನ್ನೆರಡು ವರ್ಷಗಳನ್ನು ಬೆಂಗಳೂರಲ್ಲಿ ಕಳೆದಿದ್ದ. ಆ ಊರಿನ ಬಗ್ಗೆ ಅವನಿಗೆ ಒಂದು ಬಗೆಯ ಮಮಕಾರ. ಆದುದರಿಂದ ತಂದೆಯ ಆಸ್ತಿಯನ್ನು ಮಾರುವುದು ಆತನಿಗೆ ಇಷ್ಟವಾಗಲಿಲ್ಲ. ವೆಂಕಾಜಿಯಿಂದ ಬೆಂಗಳೂರನ್ನು ಪಡೆಯಲು ಪ್ರಯತ್ನಿಸಿದ. ಆದರೆ, ಇದು ಸಾಧ್ಯವಾಗಲಿಲ್ಲ. ಹಾಗೆ ಪಡೆಯುವ ಮುನ್ನವೇ ಮರಣ ಹೊಂದಿದ. ಶಿವಾಜಿಯ ಮಗ ಸಂಭಾಜಿ. ಆತ ತನ್ನ ತಂದೆ ಶಿವಾಜಿಯ ಆಸೆಯನ್ನು ಪೂರೈಸಲು ಬೆಂಗಳೂರಿನ ಮೇಲೆ ದಂಡೆತ್ತಿ ಬಂದ. ವೆಂಕಾಜಿಯ ಸಹಾಯಕ್ಕೆ ಮುಘಲ್ ಸೇನೆ ಬಂತು. ದಳಪತಿ ಖಾಸಿಂ ಖಾನ್ ಬೆಂಗಳೂರನ್ನು ಕೈವಶ ಮಾಡಿಕೊಂಡ. ಸುಮಾರು ಮುನ್ನೂರು ವರ್ಷಗಳ ಹಿಂದೆ ಮೈಸೂರಿನ ಅರಸು ದೊರೆ, ಚಿಕ್ಕದೇವರಾಜ ಖಾಸಿಂಖಾನ್‌ನಿಂದ ಬೆಂಗಳೂರನ್ನು ಕೊಂಡ. ಆ ಕಾಲಕ್ಕೆ ಅವನು ನೀಡಿದ ಹಣ ಸುಮಾರು ಮೂರು ಲಕ್ಷ ರೂಪಾಯಿಗಳು. ಚಿಕ್ಕದೇವರಾಜ ಬೆಂಗಳೂರಿನ ಸುತ್ತಲೂ ಹೊಸದಾಗಿ ಕೋಟೆ ಕಟ್ಟಿಸಿದ. ಅಲ್ಲಿ ತನ್ನ ಸೇನೆಯನ್ನು ನೆಲೆಗೊಳಿಸಿದ. ಉತ್ತಮ ಆಡಳಿತಗಾರರನ್ನು ನೇಮಿಸಿದ. ಇದೇ ಕಾಲದಲ್ಲಿ ಕೋಟೆ ವೆಂಕಟರಮಣಸ್ವಾಮಿಯ ದೇವಸ್ಥಾನವನ್ನು ಕಟ್ಟಿಸಿದ.

ಮೈಸೂರು ಸಂಸ್ಥಾನದ ಸೇನೆಯಲ್ಲಿ ಹೈದರ್ ಆಲಿ ಸಾಮಾನ್ಯ ಸೈನಿಕ. ಆತ ತನ್ನ ಪರಾಕ್ರಮದಿಂದ ಹಂತ ಹಂತವಾಗಿ ಮೇಲೇರಿದವನು. ಮೈಸೂರನ್ನು ಆಕ್ರಮಿಸಲು ಬಂದವರನ್ನು ಹೊಡೆದೋಡಿಸಿದ. ಇದಕ್ಕೆ ಪ್ರತಿಫಲವಾಗಿ ಮೈಸೂರಿನ ರಾಜ ಚಿಕ್ಕ ಕೃಷ್ಣರಾಜ ಒಡೆಯರ್ ಹೈದರ್‌ಗೆ ಸುಮಾರು ಇನ್ನೂರೈವತ್ತು ವರ್ಷದ ಹಿಂದೆ ಬೆಂಗಳೂರನ್ನು ಜಹಗೀರಾಗಿ ನೀಡಿದ. ಎರಡು ವರ್ಷಗಳಲ್ಲಿ ಹೈದರ್ ಬೆಂಗಳೂರಿಗೆ ಹೊಸದಾಗಿ ಕಲ್ಲಿನ ಕೋಟೆಯನ್ನು ಕಟ್ಟಿಸಿದ. ಇದು ತುಂಬಾ ಭದ್ರವಾದ ಕೋಟೆ. ಈ ಕೋಟೆಗೆ ಎರಡು ಬಾಗಿಲುಗಳಿವೆ ಉತ್ತರಕ್ಕೆ ದೆಹಲಿ ಬಾಗಿಲು ಮತ್ತು ದಕ್ಷಿಣಕ್ಕೆ ಮೈಸೂರು ಬಾಗಿಲು. ಕೋಟೆಯ ಒಳಗೆ, ಹೈದರನು ಫಿರಂಗಿ ಮತ್ತು ಇತರ ಯುದ್ಧ ವಸ್ತುಗಳ ತಯಾರಿಕೆ ಆರಂಭ ಮಾಡಿದ. ಹೈದರ್ ಮತ್ತು ಅವನ ಮಗ ಟಿಪ್ಪುವಿಗೆ ಬೆಂಗಳೂರು ಒಳ್ಳೆಯ ಆಶ್ರಯ ನೀಡಿತ್ತು. ಸಹಜವಾಗಿ ಬೆಂಗಳೂರಿನ ಮೇಲೆ ಬ್ರಿಟಿಷರ ಕಣ್ಣು ಬಿದ್ದಿತ್ತು. ಲಾರ್ಡ್ ಕಾರ್ನವಾಲೀಸನ ಸೈನ್ಯ ಬೆಂಗಳೂರನ್ನು ವಶಪಡಿಸಿಕೊಂಡಿತು. ಯುದ್ಧ ಮುಗಿಯಿತು. ಆಗ ನಡೆದ ಒಪ್ಪಂದದ ಪ್ರಕಾರ ಬೆಂಗಳೂರು ಮತ್ತೆ ಟಿಪ್ಪುವಿಗೇ ಬಂತು. ಇನ್ನೂರು ವರ್ಷಗಳ ಹಿಂದೆ ಟಿಪ್ಪು ಮರಣ ಹೊಂದಿದ. ಅನಂತರ ಬ್ರಿಟಿಷರು ಬೆಂಗಳೂರನ್ನು ಮೈಸೂರು ರಾಜಮನೆತನಕ್ಕೆ ವಹಿಸಿದರು.

ಟಿಪ್ಪುವಿನ ಮರಣವಾದ ಮೇಲೆ ಬ್ರಿಟಿಷ್‌ಸೇನೆ ಶ್ರೀರಂಗಪಟ್ಟಣದಲ್ಲೇ ನೆಲೆ ನಿಂತಿತ್ತು. ಎಂಟು ವರ್ಷವಾದ ಮೇಲೆ ಸೇನೆ ಬೆಂಗಳೂರಿಗೆ ಬಂತು. ಇಲ್ಲಿ ಸೇನೆಯು ನೆಲೆಗಾಗಿ ದಂಡುಪ್ರದೇಶ ಕಟ್ಟಲು ಬ್ರಿಟಿಷ್ ಸರ್ಕಾರ ಯೋಚಿಸಿತು. ಅದಕ್ಕಾಗಿ ಅಲಸೂರಿನ ಬಳಿಯಿದ್ದ ಸೋಮೇಶ್ವರ ದೇವಸ್ಥಾನದ ಪ್ರದೇಶವನ್ನು ಆರಿಸಿತು. ಇಲ್ಲಿ ಸೇನೆಗೆ ಅಗತ್ಯವಾದ ಕಚೇರಿಗಳನ್ನು, ವಾಸದ ಮನೆಗಳನ್ನು ಕಟ್ಟಿದರು. ಈ ಪ್ರದೇಶಕ್ಕೆ ದಂಡು ಪ್ರದೇಶ ಅಥವಾ ಕಂಟೋನ್ಮೆಂಟ್ ಎಂಬ ಹೆಸರು ಬಂತು. ಇದು ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟಿತ್ತು. ನೂರೈವತ್ತು ವರ್ಷಗಳ ಹಿಂದೆ ಬ್ರಿಟಿಷರು ಮೈಸೂರು ಸಂಸ್ಥಾನದ ಆಡಳಿತವನ್ನು ವಹಿಸಿಕೊಂಡರು. ಹಿತಕರ ಹವೆಯಿದ್ದ ಬೆಂಗಳೂರು ಬ್ರಿಟಿಷರನ್ನು ಸೆಳೆಯಿತು. ಜೊತೆಗೆ ನಾಗರಿಕ ಸವಲತ್ತುಗಳು ಹೆಚ್ಚಿದವು. ಮೈಸೂರು ಸಂಸ್ಥಾನದ ಮೊದಲ ಕಮಿಷನರ್ ಆಗಿ ಮಾರ್ಕ್ ಕಬ್ಬನ್ ಅಧಿಕಾರ ವಹಿಸಿಕೊಂಡ. ಅವನ ಕಾಲದಲ್ಲಿ ಬೆಂಗಳೂರು ಹೊಸ ರೂಪ ತಾಳಿ ಮುನ್ನಡೆಯಿತು. ಸವಲತ್ತುಗಳು ಹೆಚ್ಚಾದವು. ತಂತಿ ಸೌಲಭ್ಯ ಇಲ್ಲಿಗೆ ಬಂತು. ಬೆಂಗಳೂರು-ಜೋಲಾರಪೇಟೆ ನಡುವೆ ರೈಲು ಮಾರ್ಗವಾಯಿತು. ಮುಂದೆ ಬೌರಿಂಗ್ ಕಮಿಷನರ್ ಆದ. ಆಗ ಆಡಳಿತ ಕೆಲಸ ಹೆಚ್ಚಿತು. ಅದಕ್ಕಾಗಿ ಅಠಾರ ಕಚೇರಿ ಕಟ್ಟಲಾಯಿತು. ಈ ಕಟ್ಟಡದಲ್ಲಿ ಈಗ ರಾಜ್ಯದ ಉಚ್ಚ ನ್ಯಾಯಾಲಯವಿದೆ.



ಬೆಂಗಳೂರ ಅರಮನೆ

ಸುಮಾರು ಒಂದು ನೂರು ವರ್ಷಗಳ ಹಿಂದೆ ಮೈಸೂರಿನ ರಾಜರು ಮತ್ತೆ ಸಂಸ್ಥಾನದ ಆಡಳಿತ ವಹಿಸಿಕೊಂಡರು. ಬ್ರಿಟಿಷರ ನೇರ ಆಡಳಿತ ಕೊನೆಯಾಯಿತು. ಆದರೆ ದಂಡು ಪ್ರದೇಶ ಬ್ರಿಟಿಷರ ಆಡಳಿತದಲ್ಲೇ ಇತ್ತು. ಹೀಗೆ ಕೆಲವುಕಾಲ ಒಂದೇ ಪ್ರದೇಶದಲ್ಲಿ ಎರಡು ಸರ್ಕಾರಗಳ ಆಡಳಿತವಿತ್ತು. ದೇಶ ಸ್ವತಂತ್ರವಾಗುವ ವೇಳೆಗೆ ಬ್ರಿಟಿಷರು ದಂಡು ಪ್ರದೇಶವನ್ನು ಬಿಟ್ಟುಕೊಟ್ಟರು. ಮೈಸೂರು ಸಂಸ್ಥಾನಕ್ಕೆ ಮೈಸೂರು ನಗರ ರಾಜಧಾನಿಯಾಗಿತ್ತು. ಆದರೆ ದೇಶ ಸ್ವತಂತ್ರವಾದ ಮೇಲೆ ಬೆಂಗಳೂರು ರಾಜಧಾನಿಯ ಗೌರವ ಪಡೆಯಿತು. ಅದು ಅಂದಿನಿಂದ ದೊಡ್ಡ ನಗರವಾಗಿ ಬೆಳೆಯುತ್ತಲೇ ಇದೆ.

## ಪ್ರಮುಖ ಕಟ್ಟಡಗಳು

ಬೆಂಗಳೂರು ಅನೇಕ ಹಳೆಯ ಕಟ್ಟಡಗಳಿಂದ ಕೂಡಿ ಸುಂದರವಾಗಿದೆ. ಇಲ್ಲಿ ಅರಮನೆಗಳಿವೆ. ಕೋಟೆಗಳಿವೆ. ಧಾರ್ಮಿಕ ಸ್ಥಳಗಳಿವೆ. ಮನ ಸೂರೆಗೊಳ್ಳುವ ಆಡಳಿತ ಕಚೇರಿಗಳಿವೆ. ಇವೆಲ್ಲವೂ ಪ್ರವಾಸಿಗರನ್ನು ಕೈಬೀಸಿ ಕರೆಯುತ್ತವೆ.

ಈ ನಗರದಲ್ಲಿ ಅನೇಕ ಧರ್ಮಗಳಿಗೆ ಸೇರಿದ ಜನರಿದ್ದಾರೆ. ಅದರಂತೆಯೇ ಅನೇಕ ಗುಡಿ, ಮಸೀದಿ, ಚರ್ಚುಗಳಿವೆ. ಇವೆಲ್ಲ ಬೇರೆ ಬೇರೆ ಕಾಲಗಳಲ್ಲಿ ಕಟ್ಟಿಸಿದ ಕಟ್ಟಡಗಳು.

ಅಲಸೂರಿನಲ್ಲಿ ಸೋಮೇಶ್ವರ ದೇವಸ್ಥಾನವಿದೆ. ಇದು ತುಂಬಾ ಹಳೆಯದು. ಇದರ ಅಂಗಳ ಮತ್ತು ಗೋಪುರಗಳನ್ನು ಕೆಂಪೇಗೌಡ ಕಟ್ಟಿಸಿದ. ಅದರ ಗರ್ಭಗುಡಿ ಮಾತ್ರ ಒಂಬೈನೂರು ವರ್ಷಗಳಷ್ಟು ಹಳೆಯದು.

ಗುಟ್ಟಹಳ್ಳಿಯಲ್ಲಿ ಗವಿ ಗಂಗಾಧರೇಶ್ವರ ಗುಡಿಯಿದೆ. ಇದನ್ನು ಗುಹೆಯೊಂದರಲ್ಲಿ ಕಟ್ಟಲಾಗಿದೆ. ಬಸವನಗುಡಿಯಲ್ಲಿ ಸುಂದರ ಬಸವನ ಮೂರ್ತಿ ಇರುವ ಬಸವಣ್ಣನ ಗುಡಿಯಿದೆ. ಸಮೀಪದಲ್ಲಿ ಕಾಡು ಹನುಮಾನ್ ಗುಡಿಯಿದೆ. ಮಲ್ಲೇಶ್ವರದಲ್ಲಿ ಕಾಡು ಮಲ್ಲೇಶ್ವರನ ಗುಡಿಯಿದೆ. ಇವೆಲ್ಲವೂ ಕೆಂಪೇಗೌಡನ ಕಾಲದ ದೇವಾಲಯಗಳು.

ಕೋಟೆ ವೆಂಕಟರಮಣಸ್ವಾಮಿ ದೇವಾಲಯ ತುಂಬಾ ಸುಂದರವಾಗಿದೆ. ಇದು ನಗರದ ಮುಖ್ಯ ಮಾರುಕಟ್ಟೆಗೆ ಸಮೀಪದಲ್ಲಿದೆ. ಬೆಂಗಳೂರನ್ನು ಕೊಂಡ ಚಿಕ್ಕದೇವರಾಜ



ಅಲಸೂರಿನ ಸೋಮೇಶ್ವರ ದೇವಾಲಯ

ಇದನ್ನು ಕಟ್ಟಿಸಿದ. ಎಂಟು ಕೋನದ ಗರುಡಗಂಭ ಇಲ್ಲಿದೆ. ಎತ್ತರವಾದ ಜಗಲಿಯ ಮೇಲೆ ಸುಂದರ ಕೆತ್ತನೆಯ ಕಂಬಗಳಿವೆ. ಗರ್ಭಗುಡಿಯಲ್ಲಿ ವೆಂಕಟರಮಣನ ಸುಂದರ ಮೂರ್ತಿ ಇದೆ.

ಧರ್ಮರಾಯನ ಗುಡಿ ಮತ್ತೊಂದು ಪ್ರಸಿದ್ಧವಾದ ದೇವಾಲಯ. ಇದು ನಗರ್ತರ ಪೇಟೆಯಲ್ಲಿದೆ. ಹೊಸದಾಗಿ ಕಟ್ಟಿರುವ ದೇವಸ್ಥಾನಗಳಲ್ಲಿ ಹನುಮಂತನಗರದ ರಾಮಾಂಜನೇಯ ದೇವಾಲಯ ಪ್ರಸಿದ್ಧಿಯನ್ನು ಪಡೆದಿದೆ. ರಾಗೀಗುಡ್ಡದ ಆಂಜನೇಯ ದೇವಸ್ಥಾನ ಈಗ ದೊಡ್ಡ ಧಾರ್ಮಿಕ ಕೇಂದ್ರವಾಗಿ ಬೆಳೆಯುತ್ತಿದೆ.

ಬೆಂಗಳೂರಿನಲ್ಲಿ ಸೊಬಗಿನ ಮಸೀದಿ ಮತ್ತು ದರ್ಗಾಗಳಿವೆ. 'ತಾರಾಮಂಡಲ್ ಸಂಗೀನ್ ಜುಮ್ಮಾ ಮಸೀದಿ' ತುಂಬಾ ಹಳೆಯದು. ಇದನ್ನು ಮುಘಲರ ಕಿಲ್ಲೇದಾರ ಕಟ್ಟಿಸಿದ. ಶಿವಾಜಿನಗರದ ಸಮೀಪ ತುಂಬಾ ಸುಂದರವಾದ ಜುಮ್ಮಾ ಮಸೀದಿ ಇದೆ. ಸಿಟಿ ಮಾರುಕಟ್ಟೆ ಬಳಿ ಇರುವ 'ಜುಮ್ಮಾ ಮಸೀದಿ'ಗೆ ಎತ್ತರವಾದ ಮಿನಾರುಗಳಿವೆ. ಅದು ನೋಡಲು ಭವ್ಯವಾಗಿದೆ. ಕುಂಬಾರ ಪೇಟೆಯಲ್ಲಿರುವ 'ಇಬ್ರಾಹಿಂ ಷಾ ಸಾಹೇಬ್ ಮಸೀದಿ' ಮತ್ತೊಂದು ಹಳೆಯ ಮಸೀದಿ. ಕಾಟನ್‌ಪೇಟೆಯಲ್ಲಿ 'ಹಜರತ್ ತೌಕ್ಕಾಲ್ ಮಸ್ತಾನ್ ದರ್ಗಾ' ಇದೆ. ಇದಕ್ಕೆ ಎಲ್ಲಾ ಧರ್ಮಗಳವರು ನಡೆದುಕೊಳ್ಳುತ್ತಾರೆ.

ಬ್ರಿಟಿಷರಿಗೆ ಬೆಂಗಳೂರು ತುಂಬಾ ಇಷ್ಟವಾದ ನಗರವಾಗಿತ್ತು. ಅವರು ಇಲ್ಲಿ ಅನೇಕ ಚರ್ಚುಗಳನ್ನು ಕಟ್ಟಿದರು. ಇದರಿಂದ ಯೂರೋಪಿಯನ್ ವಾಸ್ತುಶಿಲ್ಪದ ಮೆರುಗು ಬೆಂಗಳೂರಿಗೆ ಬಂತು. ಇವು ಪ್ರವಾಸಿಗರ ಮನಸ್ಸನ್ನು ಸೂರೆಗೊಳ್ಳುತ್ತವೆ. ಬಿಷಪ್ ಟರ್ನರ್ಸ್ ಚರ್ಚ್, ಬೆಂಗಳೂರಿಗೆ ತುಂಬಾ ಹಳೆಯ ಚರ್ಚ್. ತರಗು ಪೇಟೆಯಲ್ಲಿ ಸಂತ ಜೋಸೆಫ್ ಚರ್ಚ್ ಇದೆ. ಇದನ್ನು ಶಿಲುಬೆಯಾಕಾರದಲ್ಲಿ ಕಟ್ಟಲಾಗಿದೆ. ಶಿವಾಜಿನಗರದಲ್ಲಿ ಸಂತ ಮೇರಿ ಚರ್ಚು ಭವ್ಯವಾಗಿದೆ. ಇದಲ್ಲದೆ ಸುಂದರವಾಗಿ ಕಟ್ಟಿರುವ ಸಂತ ಮಾರ್ಕ್, ಆಂಡ್ರೂಸ್, ಫ್ರಾನ್ಸಿಸ್ ಕ್ಸೇವಿಯರ್ಸ್, ಹೋಲಿ ಟ್ರಿನಿಟಿ, ಮೆಥಾಡಿಸ್ಟ್ ಮೆಮೋರಿಯಲ್ ಮತ್ತು ಆಲ್‌ಸೇಂಟ್ಸ್ ಚರ್ಚುಗಳಿವೆ.



ಇಷ್ಟೇ ಇಲ್ಲದೆ ಇನ್ನೂ ಕೆಲವು ಧರ್ಮಗಳಿಗೆ ಸೇರಿದ ಅನೇಕ ಆರಾಧನ ಮಂದಿರಗಳೂ ಇಲ್ಲಿವೆ. ಅಲಸೂರಿನ ಬಳಿ ಸಿಖ್ ಗುರುದ್ವಾರವಿದೆ. ಬಳ್ಳಾರಿ-ಬೆಂಗಳೂರು ರಸ್ತೆಯ ಕೊಡಿಗೆ ಹಳ್ಳಿಗೆ ಸಮೀಪ ಪಾರ್ಸಿಗಳ ಧಾರ್ಮಿಕ ತಾಣವಿದೆ. ಜಯನಗರದಲ್ಲಿ ಅಮೃತ



ಗವಿಗಂಗಾಧರೇಶ್ವರ ದೇವಾಲಯ

ಶಿಲೆಯಿಂದ ಕಟ್ಟಿಸಿದ ಜೈನ ದೇವಾಲಯವಿದೆ. ಗಾಂಧಿನಗರ ಮತ್ತು ಚಿಕ್ಕಪೇಟೆಯಲ್ಲಿ ಜೈನ ಬಸದಿಗಳಿವೆ.

## ಅರಮನೆಗಳು

ಬೆಂಗಳೂರಿನ ಮುಖ್ಯ ಸ್ಮಾರಕಗಳಲ್ಲಿ ಟಿಪ್ಪು ಅರಮನೆಯೂ ಒಂದು. ಇದು ವಿಕ್ಟೋರಿಯಾ ಆಸ್ಪತ್ರೆಗೆ ಹತ್ತಿರವಿದೆ. ಶ್ರೀರಂಗಪಟ್ಟಣದಲ್ಲಿನ ದರಿಯಾ ದೌಲತ್ ಮಾದರಿಯಲ್ಲೇ ಇದನ್ನು ಕಟ್ಟಲಾಗಿದೆ. ಹೈದರನು ಇದನ್ನು ಕಟ್ಟಲು ಆರಂಭಿಸಿದ. ಅವನ ಮಗ ಟಿಪ್ಪು ಇದನ್ನು ಪೂರ್ಣಗೊಳಿಸಿದ. ಹಿಂದಿನ ವೈಭವ ಈಗ ಇಲ್ಲ. ಬ್ರಿಟಿಷರು ಕೆಲವು ಕಾಲ ಇದನ್ನು ಆಡಳಿತ ಕಚೇರಿಯಾಗಿ ಬಳಸಿದ್ದರು.

ಮೈಸೂರು ಒಡೆಯರು ಬೆಂಗಳೂರಿನಲ್ಲಿ ಸುಂದರವಾದ ಅರಮನೆ ಕಟ್ಟಿಸಿದ್ದಾರೆ. ಇದು ಗುಟ್ಟಹಳ್ಳಿಯಲ್ಲಿ ವಿಶಾಲವಾದ ತೋಟದ ನಡುವೆ ಇದೆ. ಇಂಗ್ಲೆಂಡ್‌ನ ವಿಂಡ್ಸರ್ ಅರಮನೆ ಮಾದರಿಯಲ್ಲೇ ಇದನ್ನು ಕಟ್ಟಲಾಗಿದೆ.

## ಆಡಳಿತ ಕಟ್ಟಡಗಳು

ವಿಧಾನಸೌಧದ ಹೆಸರನ್ನು ಕೇಳದೇ ಇರುವವರು ಯಾರು? ಇದನ್ನು ಹಿಂದಿನ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರು ಕಟ್ಟಿಸಿದರು. ಇಲ್ಲಿ ಅನೇಕ ಶೈಲಿಗಳು ಮಿಳಿತವಾಗಿವೆ. ಎತ್ತರವಾದ ಗುಮ್ಮಟಗಳಿವೆ. ದೊಡ್ಡ ಗುಮ್ಮಟದ ಮೇಲೆ ಅಶೋಕಸ್ತಂಭ ರಾರಾಜಿಸುತ್ತಿದೆ. ಇದು ಭವ್ಯತೆಯೇ ಮೂಡಿ ನಿಂತಂತಿದೆ. ಕಟ್ಟಡದ ನಾಲ್ಕು ಮೂಲೆಗಳಲ್ಲೂ ಗೋಪುರಾಕಾರದ ಗುಮ್ಮಟಗಳಿವೆ.

ಬ್ರಿಟಿಷರ ಕಾಲದಲ್ಲಿ ಅನೇಕ ಕಟ್ಟಡಗಳನ್ನು ಕಟ್ಟಲಾಯಿತು. ಅವೆಲ್ಲ ಬೆಂಗಳೂರಿಗೆ ಮೆರಗು ನೀಡಿವೆ. ಅವುಗಳಲ್ಲಿ ಈಗ ಉಚ್ಚ ನ್ಯಾಯಾಲಯ ಇರುವ ಅಠಾರಾ ಕಚೇರಿಯೂ ಒಂದು. ಇದಲ್ಲದೆ, ಪುಟ್ಟಣ್ಣ ಚೆಟ್ಟಿ ಪುರಭವನ, ಮೇಯೋಹಾಲ್, ರಾಜ ಭವನ, ಸೆಂಟ್ರಲ್



ಬಿಷಪ್ ಟರ್ನರ್ಸ್ ಚರ್ಚ್

ಕಾಲೇಜು, ಕುಮಾರ ಕೃಪಾ, ಶೇಷಾದ್ರಿ ಭವನ, ವಸ್ತು ಸಂಗ್ರಹಾಲಯ ಕಟ್ಟಡ, ಮೊದಲಾದವುಗಳು ಪ್ರವಾಸಿ ತಾಣಗಳೆನಿಸಿವೆ.

ಈ ಬೆಂಗಳೂರು ನಮ್ಮ ರಾಜ್ಯದ ರಾಜಧಾನಿ. ಆ ಕಾರಣ ಇದೇ ಆಡಳಿತ ಕೇಂದ್ರ. ಇಲ್ಲಿ ರಾಜ್ಯದ ಎಲ್ಲಾ ಇಲಾಖೆಯ ಮುಖ್ಯ ಕಚೇರಿಗಳಿವೆ. ಅಲ್ಲದೆ, ಉಚ್ಚನ್ಯಾಯಾಲಯ ಮತ್ತು ರಾಜ್ಯ ಲೋಕಸೇವಾ ಆಯೋಗದ ಕಚೇರಿಗಳಿವೆ. ಕೇಂದ್ರ ಸರ್ಕಾರದ ಪ್ರಮುಖ ಕಚೇರಿಗಳೂ ಇವೆ.

## ಕೈಗಾರಿಕೆ

ಬೆಂಗಳೂರು ಈಗ ಒಂದು ಪ್ರಮುಖ ಕೈಗಾರಿಕಾ ಕೇಂದ್ರ. ಕೈಗಾರಿಕೆಗಳಿಗೆ ಮೊದಲು ಒತ್ತಾಸೆ ನೀಡಿದವರು ಮೈಸೂರು ಒಡೆಯರುಗಳು. ಜೊತೆಗೆ ಸರ್ ಎಂ. ವಿಶ್ವೇಶ್ವರಯ್ಯನವರಂಥ ಮೇಧಾವಿಗಳು ಕೈಗಾರಿಕೆಗೆ ಉತ್ತೇಜನ ನೀಡಿದರು. ವಿದ್ಯುತ್ ಉತ್ಪಾದನೆ ಮೊದಲು ಆರಂಭವಾಗಿದ್ದು ಮೈಸೂರು ಸಂಸ್ಥಾನದಲ್ಲಿ. ಬೆಂಗಳೂರಿನಲ್ಲಿ ಹಿತವಾದ ವಾಯುಗುಣವಿತ್ತು. ಮದರಾಸು ಮತ್ತು ಮಂಗಳೂರು ದೇಶದ ಎರಡು ಮುಖ್ಯ ಬಂದರುಗಳು. ಬೆಂಗಳೂರು ಇವೆರಡಕ್ಕೂ ಸಮಾನ ದೂರದಲ್ಲಿದೆ. ಆದ್ದರಿಂದ ಸರಕು ಸಾಗಣೆ, ಮಾರಾಟ ಜಾಲಕ್ಕೆ ಅನುಕೂಲ. ಈ ಕಾರಣಗಳಿಂದ ಇಲ್ಲಿ ಕೈಗಾರಿಕೆ ತಲೆ ಎತ್ತಲು ಕಾರಣವಾಯಿತು.

ಬೆಂಗಳೂರಿನಲ್ಲಿ ಅನೇಕ ವ್ಯಾಪಾರಿ ಸಂಸ್ಥೆಗಳಿವೆ. ದೇಶ ವಿದೇಶಗಳ ಅನೇಕ ಸಂಸ್ಥೆಗಳು ಇಲ್ಲಿ ವಹಿವಾಟುಗಳನ್ನು ನಡೆಸುತ್ತಿವೆ. ವ್ಯಾಪಾರಕ್ಕೆ ಉತ್ತೇಜನ ನೀಡುವ ಹಣಕಾಸು ಸಂಸ್ಥೆಗಳಿವೆ. ಅವುಗಳಲ್ಲಿ ಕರ್ನಾಟಕ ಹಣಕಾಸು ಸಂಸ್ಥೆ, ಕೈಗಾರಿಕಾ ಹಣಕಾಸು ನಿಗಮ, ಕೈಗಾರಿಕಾ ಅಭಿವೃದ್ಧಿ ಬ್ಯಾಂಕು ಮತ್ತು ರಾಜ್ಯ ಅಪೆಕ್ಸ್ ಬ್ಯಾಂಕ್ ಪ್ರಮುಖವಾದವು. ಇವುಗಳಲ್ಲದೆ ನಗರದಲ್ಲಿ ಸುಮಾರು ಐದು ನೂರಕ್ಕೂ ಹೆಚ್ಚು ವಾಣಿಜ್ಯ ಬ್ಯಾಂಕುಗಳಿವೆ. ಸರ್ ಎಂ. ವಿಶ್ವೇಶ್ವರಯ್ಯನವರು ಕೈಗಾರಿಕೆ ಬೆಳೆಯಲೆಂದೇ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್ ಸಂಸ್ಥೆಯನ್ನು ಸ್ಥಾಪಿಸಿದರು. ಇದರ ಜೊತೆಗೆ ಕೆನರಾಬ್ಯಾಂಕ್ ಮತ್ತು ವಿಜಯಾ ಬ್ಯಾಂಕ್‌ಗಳ ಪ್ರಧಾನ ಕಚೇರಿಗಳು ಇಲ್ಲಿವೆ. ಅಲ್ಲದೆ ಷೇರು ಮಾರುಕಟ್ಟೆ, ಸಗಟು ವ್ಯಾಪಾರದ ಏಳಿಗೆ, ನಿಯಂತ್ರಿತ ಮಾರುಕಟ್ಟೆ ಇತ್ಯಾದಿಗಳು ಇವೆ. ಬೆಂಗಳೂರು ಉತ್ತಮ ಸಾರಿಗೆ ಜಾಲವನ್ನು ಹೊಂದಿದೆ. ಮುಂಬಯಿ, ದೆಹಲಿ, ಮದರಾಸು, ಕೊಚ್ಚಿನ್, ಹೈದರಾಬಾದ್, ಮಂಗಳೂರುಗಳಿಗೆ ನೇರ




ಪುರಭವನ

ವಿಮಾನ ಸಂಪರ್ಕವಿದೆ. ಬೆಂಗಳೂರಿನಿಂದ ಮದರಾಸು, ದೆಹಲಿ, ಗುಂತಕಲ್ಲು, ಮೈಸೂರು ಮತ್ತು ಸೇಲಂ ವಿಭಾಗಗಳಿಗೆ ರೈಲು ಮಾರ್ಗಗಳಿವೆ. ಉತ್ತಮ ರಸ್ತೆ ಸಂಪರ್ಕದ ನೆರವೂ ಇದೆ. ಇವೆಲ್ಲ ಬೆಂಗಳೂರು ಕೈಗಾರಿಕಾ ಕ್ಷೇತ್ರವಾಗಿ ಮುನ್ನಡೆಯಲು ಕಾರಣವಾದವು.

ಇಲ್ಲಿ ರಾಜ್ಯ ಮತ್ತು ಕೇಂದ್ರ ಸರ್ಕಾರಗಳಿಗೆ ಸೇರಿದ ಅನೇಕ ಉದ್ದಿಮೆಗಳಿವೆ. ರಾಜ್ಯ ಸರ್ಕಾರಕ್ಕೆ ಸೇರಿದ ಸಾಬೂನು ಕಾರ್ಖಾನೆ, ಮೈಸೂರ್ ಲ್ಯಾಂಪ್ಸ್, ಎನ್‌ಜಿಇಎಫ್, ಮುಂತಾದ ದೊಡ್ಡ ಉದ್ದಿಮೆಗಳಿವೆ. ಕೇಂದ್ರ ಸರ್ಕಾರದ ಬಹುಪಾಲು ಉದ್ದಿಮೆಗಳು ಇರುವುದು ಬೆಂಗಳೂರಿನಲ್ಲಿ. ಗಡಿಯಾರ ಕಾರ್ಖಾನೆ, ಬಿಇಎಲ್, ಟೆಲಿಫೋನ್ ಸಂಸ್ಥೆ, ಬಿಎಚ್‌ಇಎಲ್, ರೈಲು ಕೋಚ್ ತಯಾರಿಕಾ ಸಂಸ್ಥೆ ಇತ್ಯಾದಿ, ಕೇಂದ್ರ ಸರ್ಕಾರದ ಉದ್ದಿಮೆಗಳು. ಸುಮಾರು ಇಪ್ಪತ್ತು ವರ್ಷಗಳ ಹಿಂದೆ ದೇಶದಲ್ಲೇ ದೊಡ್ಡದಾದ ಪೀಣ್ಯಾ ಕೈಗಾರಿಕಾ ಕ್ಷೇತ್ರ ಆರಂಭವಾಯಿತು. ಹೆಚ್ಚಾಗಿ ಖಾಸಗಿ ಉದ್ಯಮಗಳು ಇಲ್ಲಿ ತಮ್ಮ ಉದ್ದಿಮೆಗಳನ್ನು ಸ್ಥಾಪಿಸಲು ಬಂದರು. ದೊಡ್ಡ, ಮಧ್ಯಮ ಉದ್ದಿಮೆಗಳಲ್ಲದೆ ಬೆಂಗಳೂರಿನಲ್ಲಿ ಹತ್ತುಸಾವಿರಕ್ಕೂ ಹೆಚ್ಚು ಸಣ್ಣ ಕೈಗಾರಿಕೆಗಳು ಇವೆ.

ಬೆಂಗಳೂರಿನಲ್ಲಿ ದೊಡ್ಡ ದೊಡ್ಡ ಯಂತ್ರಗಳು ತಯಾರಾಗುತ್ತವೆ. ದಿನ ನಿತ್ಯದ ಬಳಕೆಯ ವಸ್ತುಗಳೂ ಉತ್ಪಾದನೆಯಾಗುತ್ತವೆ. ಚರ್ಮದ ವಸ್ತು, ಬಟ್ಟೆ, ರಾಸಾಯನಿಕ ವಸ್ತು, ಸುಗಂಧ ದ್ರವ್ಯ, ಅಗರ ಬತ್ತಿ, ಗಾಜಿನ ಸಾಮಾನು, ಪಾನೀಯ ಮುಂತಾದ ವಸ್ತುಗಳು ತಯಾರಾಗುತ್ತವೆ. ಬೆಂಗಳೂರಿನಲ್ಲಿ ತಯಾರಾಗುವ ವಸ್ತುಗಳನ್ನು ಪಟ್ಟಿ ಮಾಡುವುದು ಕಷ್ಟ. ಇಲ್ಲಿ ಯಾವ ವಸ್ತು ತಯಾರಾಗುವುದಿಲ್ಲ ಎಂದು ಹೇಳುವುದು ಸುಲಭ. ಬೆಂಗಳೂರಿನ ಹಿರಿಮೆ ಅಡಗಿರುವುದೇ ಇಲ್ಲಿ.

## ವಿದ್ಯಾ ಸಂಸ್ಥೆಗಳು

ಮೊದಲಿನಿಂದಲೂ ಬೆಂಗಳೂರು ಕಲಿಕೆಯ ಕೇಂದ್ರ ಎನಿಸಿದೆ. ಇಲ್ಲಿನ ಸೆಂಟ್ರಲ್ ಕಾಲೇಜು ವಿಶ್ವವಿಖ್ಯಾತ. ಇದು ತುಂಬಾ ಹಳೆಯದು. ಬ್ರಿಟಿಷರ ಕಾಲದ್ದು. ಇದಲ್ಲದೆ ವೃತ್ತಿ ಶಿಕ್ಷಣ ನೀಡುವ ಅನೇಕಾನೇಕ ವಿದ್ಯಾಸಂಸ್ಥೆಗಳು ಇಲ್ಲಿವೆ. ಬೆಂಗಳೂರು ವಿಶ್ವವಿದ್ಯಾಲಯ ಮತ್ತು ಕೃಷಿ ವಿಶ್ವವಿದ್ಯಾಲಯ ಎಂಬ ಎರಡು ವಿಶ್ವವಿದ್ಯಾಲಯಗಳಿವೆ. ಅಲ್ಲದೆ ಭಾರತೀಯ ವಿಜ್ಞಾನ ಸಂಸ್ಥೆ, ಭಾರತೀಯ ಆಡಳಿತ ಶಿಕ್ಷಣ ಸಂಸ್ಥೆ, ಆಡುಗೋಡಿಯ ಕ್ಷೀರೋದ್ಯಮ ಸಂಸ್ಥೆಗಳು

ಸ್ವತಂತ್ರವಾಗಿ ಪದವಿ ನೀಡುತ್ತವೆ. ಸುಮಾರು ಅರವತ್ತಕ್ಕೂ ಹೆಚ್ಚಿನ ಕಾಲೇಜುಗಳು ನಾನಾ ವಿಷಯಗಳ ಬೋಧನೆಯಲ್ಲಿ ನಿರತವಾಗಿವೆ. ಕೃಷಿ, ಭೌತವಿಜ್ಞಾನ, ಜೀವವಿಜ್ಞಾನ, ಮಾನಸಿಕ ಆರೋಗ್ಯ ಇತ್ಯಾದಿ ವಿಷಯ ಕುರಿತಂತೆ ಸುಮಾರು ಮೂವತ್ತು ಸಂಶೋಧನಾ ಕೇಂದ್ರಗಳಿವೆ.

## ನಾಗರಿಕ ಸೌಲಭ್ಯಗಳು

ಬೆಂಗಳೂರಿನ ನಗರ ಸಾರಿಗೆ ಸಂಸ್ಥೆಯು ಉತ್ತಮ ಸಾರಿಗೆ ಜಾಲವನ್ನು ಹೊಂದಿದೆ. ನಾಗರಿಕ ಸವಲತ್ತುಗಳನ್ನು ನಿರ್ವಹಿಸಲು ನಗರ ಪಾಲಿಕೆಯಿದೆ. ಜೊತೆಗೆ ನಗರದ ಅಭಿವೃದ್ಧಿಯೋಜನೆಗಾಗಿ ಅಭಿವೃದ್ಧಿ ಪ್ರಾಧಿಕಾರವಿದೆ. ಹೆಸರಘಟ್ಟ, ತಿಪ್ಪಗೊಂಡನಹಳ್ಳಿ ಮತ್ತು ಕಾವೇರಿ ನದಿಯಿಂದ ನೀರು ಸರಬರಾಜು ಮಾಡಲಾಗುತ್ತಿದೆ.

ಬೆಂಗಳೂರಿನಲ್ಲಿ ಸುಮಾರು ಹತ್ತು ಸಾರ್ವಜನಿಕ ಆಸ್ಪತ್ರೆಗಳಿವೆ. ಹಲವಾರು ಆರೋಗ್ಯ ಕೇಂದ್ರಗಳಿವೆ. ಕ್ಯಾನ್ಸರ್, ಕ್ಷಯ, ಕುಷ್ಠ, ಮಾನಸಿಕ ರೋಗ ಮತ್ತು ಮಕ್ಕಳ ಕಾಯಿಲೆಗೆ ಸಂಬಂಧಿಸಿದ ವಿಶೇಷ ಆಸ್ಪತ್ರೆಗಳು ಇವೆ. ಇವಲ್ಲದೆ ಅನೇಕ ಖಾಸಗಿ ಸಾರ್ವಜನಿಕ ಆಸ್ಪತ್ರೆಗಳು ಮತ್ತು ನೂರಾರು ಖಾಸಗಿ ನರ್ಸಿಂಗ್ ಹೋಂಗಳಿವೆ.

ಸಾಹಿತ್ಯ ಮತ್ತು ಸಾಂಸ್ಕೃತಿಕ ಕೇಂದ್ರಬಿಂದು, ಬೆಂಗಳೂರು. ಇಲ್ಲಿ ಅನೇಕ ಸಾಹಿತಿಗಳು ಕನ್ನಡ ಸಾಹಿತ್ಯ ಕೃಷಿ ನಡೆಸಿದ್ದಾರೆ. ಕನ್ನಡದ ಬಗ್ಗೆ ಜಾಗೃತಿ ಮೂಡಿಸಲು ಹೆಣಗಿದ್ದಾರೆ.

ಕನ್ನಡ ಬೆಳವಣಿಗೆಗೆ ಕನ್ನಡ ಸಾಹಿತ್ಯ ಪರಿಷತ್ತು ಅಪಾರ ಕೊಡುಗೆ ನೀಡಿದೆ. ಬೆಂಗಳೂರಿನಲ್ಲಿ ಸಾಹಿತ್ಯ-ಸಂಸ್ಕೃತಿಗೆ ಉತ್ತೇಜನ ನೀಡುವ ಇನ್ನೂ ಅನೇಕ ಸಂಸ್ಥೆಗಳಿವೆ. ಬೇರೆ ಬೇರೆ ಅಕಾಡೆಮಿಗಳಿವೆ. ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಾದೇಶಿಕ ಕಚೇರಿ ಇಲ್ಲಿದೆ. ವಿವಿಧ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತೊಡಗಿರುವ ಮಿಥಿಕ್ ಸೊಸೈಟಿ, ಗೋಖಲೆ ಸಾರ್ವಜನಿಕ ಸಂಸ್ಥೆ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್, ಭಾರತೀಯ ವಿದ್ಯಾಭವನ, ಮ್ಯಾಕ್ಸ್‌ಮುಲ್ಲರ್ ಭವನ ಮುಂತಾದ ಸಂಸ್ಥೆಗಳಿವೆ.

ಚಿತ್ರಕಲೆಗೆ ಪ್ರೋತ್ಸಾಹ ನೀಡುವ ವೆಂಕಟಪ್ಪ ಚಿತ್ರಶಾಲೆ, ಚಿತ್ರಕಲಾ ಪರಿಷತ್ ಅಲ್ಲದೆ ಐದು ಖಾಸಗಿ ಚಿತ್ರ ಪ್ರದರ್ಶನ ಮಳಿಗೆಗಳಿವೆ. ಕೇಂದ್ರ ಸರ್ಕಾರ ಸ್ಥಾಪಿಸಿರುವ ವಿಶ್ವೇಶ್ವರಯ್ಯ ಔದ್ಯಮಿಕ ಮತ್ತು ತಾಂತ್ರಿಕ ವಸ್ತು ಸಂಗ್ರಹಾಲಯ ಮತ್ತು ರಾಜ್ಯ ಸರ್ಕಾರದ



ಲಾಲ್‌ಬಾಗ್-ಗಾಜಿನಮನೆ



ಶೇಷಾದ್ರಿ ಸ್ಮಾರಕ ಭವನ

ಪ್ರಾಚೀನ ವಸ್ತು ಸಂಗ್ರಹಾಲಯಗಳಿವೆ. ಮಕ್ಕಳ ಮನೋವಿಕಾಸಕ್ಕೆ ಕಟ್ಟಿರುವ ನೆಹರೂ ತಾರಾಲೋಕ ನಗರದ ಮತ್ತೊಂದು ಆಕರ್ಷಕ ತಾಣ.

ಬೆಂಗಳೂರು ರಾಜ್ಯದ ಚಲನಚಿತ್ರ ನಿರ್ಮಾಣದ ಕೇಂದ್ರ ಸ್ಥಾನ. ಇಲ್ಲಿ ಒಂದು ಸರ್ಕಾರಿ ಮತ್ತು ಮೂರು ಖಾಸಗಿ ಸ್ಟುಡಿಯೋಗಳಿವೆ. ಇವು ಚಲನಚಿತ್ರ ನಿರ್ಮಾಣ, ಸಂಸ್ಕರಣದಲ್ಲಿ ನಿರತವಾಗಿವೆ. ಎಂಭತ್ತಕ್ಕೂ ಹೆಚ್ಚು ಚಿತ್ರಮಂದಿರಗಳಿವೆ. ಹಾಗೆಯೇ ರಂಗಭೂಮಿ ಮತ್ತು ಇತರ ಸಾಂಸ್ಕೃತಿಕ ಚಟುವಟಿಕೆಗಳಿಗೆ ಉತ್ತೇಜನ ನೀಡುವ ರವೀಂದ್ರ ಕಲಾಕ್ಷೇತ್ರ, ಎ.ಡಿ.ಎ. ರಂಗಮಂದಿರ, ಯವನಿಕಾ ಮಂದಿರಗಳಿವೆ.

## ಉದ್ಯಾನವನಗಳು

ಉದ್ಯಾನವನಗಳ ನಗರವೆಂದೇ ಬೆಂಗಳೂರು ಪರಿಚಿತವಾಗಿದೆ. ಉದ್ಯಾನಗಳ ಬೆಳವಣಿಗೆಗೆ ಮೈಸೂರಿನ ರಾಜರು, ಸುಲ್ತಾನರು ಮತ್ತು ಬ್ರಿಟಿಷರು ಕಾರಣ. ಸಾರ್ವಜನಿಕ

ಉದ್ಯಾನವನಗಳನ್ನು ಬೆಳೆಸಲು ತೋಟಗಾರಿಕೆ ಇಲಾಖೆ ಸಲ್ಲಿಸಿರುವ ಸೇವೆ ಸಹ ದೊಡ್ಡದು. ಇಲ್ಲಿನ ಎರಡು ಉದ್ಯಾನವನಗಳು ವಿಶ್ವವಿಖ್ಯಾತಿ ಪಡೆದಿವೆ.

## ಲಾಲ್‌ಬಾಗ್ ಉದ್ಯಾನವನ

ಹೈದರ್ ಆಲಿಯು ಹತ್ತು ಎಕರೆ ಪ್ರದೇಶದಲ್ಲಿ ಈ ಉದ್ಯಾನವನವನ್ನು ಕಟ್ಟಿಸಿದ. ಅಲ್ಲಿ ಬಗೆ ಬಗೆಯ ಹೂ ಬಿಡುವ ಗಿಡಗಳನ್ನು ಬೆಳೆಸಿದ. ಅದರ ಸೊಬಗನ್ನು ಕಂಡ ಟಿಪ್ಪು ಸುಲ್ತಾನ್ ಅದಕ್ಕೆ 'ಲಾಲ್‌ಬಾಗ್' ಅಥವಾ 'ಕೆಂಪುತೋಟ' ಎಂದು ಹೆಸರಿಟ್ಟ. ಬ್ರಿಟಿಷರು ಇದನ್ನು ಮತ್ತಷ್ಟು ಬೆಳೆಸಿದರು. ಹೊರದೇಶದಿಂದ ತಂದ ಸಸಿಗಳನ್ನು ಇಲ್ಲಿ ನೆಟ್ಟರು. ಅನಂತರ ಅದಕ್ಕೆ ಹೊಸ ರೂಪ ಕೊಟ್ಟರು. ಎಚ್.ಸಿ. ಜವರಾಯ, ನಂಜಪ್ಪ, ಎಂ.ಎಚ್. ಮರೀಗೌಡ ಮುಂತಾದವರು ಇದನ್ನು ಅಭಿವೃದ್ಧಿಪಡಿಸಿದರು. ಕ್ರಮೇಣ ಇದು ಇನ್ನೂರ ನಲವತ್ತು ಎಕರೆಗೆ ಹರಡಿಕೊಂಡಿತು.

ಇಲ್ಲಿ ಈಗ ಜಗತ್ತಿನ ನಾನಾ ಮೂಲೆಯಿಂದ ತಂದು ಬೆಳೆಸಿದ ಸಸ್ಯಗಳಿವೆ. ಎಲ್ಲಾ ಕಾಲದಲ್ಲೂ ಹೂ ಬಿಡುವ ಸಸ್ಯಗಳಿಂದ ಇದು ತುಂಬಿದೆ. ಲಾಲ್‌ಬಾಗ್ ನಿತ್ಯಹೂವಿನ ತೋಟ. ಇಲ್ಲಿ ನೂರು ವರ್ಷದ ಕೆಳಗೆ ಕಟ್ಟಿದ ಪ್ರಖ್ಯಾತ ಗಾಜಿನ ಅರಮನೆಯಿದೆ. ಹೂವಿನ ಗಡಿಯಾರವಿದೆ. ಹಿಂದೆ ವಾದ್ಯಗೋಷ್ಠಿ ನಡೆಯುತ್ತಿದ್ದ ಸ್ಥಳ, ಕೆಂಪೇಗೌಡನ ಪೂರ್ವ ದಿಕ್ಕಿನ ಗೋಪುರ, ತೋಟದೊಳಗಿನ ಕೆರೆ, ಚಾಮರಾಜ ಒಡೆಯರ್ ಪ್ರತಿಮೆ - ಇವೆಲ್ಲ ಉದ್ಯಾನವನದ ಸೊಬಗನ್ನು ಹೆಚ್ಚಿಸಿವೆ.

## ಕಬ್ಬನ್ ಪಾರ್ಕ್

ಮಾರ್ಕ್ ಕಬ್ಬನ್ ಬೆಂಗಳೂರಿನ ಮೊದಲ ಕಮಿಷನರ್. ಆತ ನಗರದ ಬೆಳವಣಿಗೆಗೆ ಅಪಾರವಾಗಿ ಶ್ರಮಿಸಿದ. ವಿಧಾನಸೌಧದ ಪೂರ್ವಕ್ಕೆ ಮುನ್ನೂರು ಎಕರೆ ಪ್ರದೇಶದಲ್ಲಿ ಇರುವ ಉದ್ಯಾನವನಕ್ಕೆ ಕಬ್ಬನ್‌ನ ಹೆಸರಿಡಲಾಗಿದೆ. ಇದು ಅಠಾರಾ ಕಚೇರಿಗೆ ಅಂಟಿಕೊಂಡಂತೆ ಇದೆ. ಇಲ್ಲಿ ಸದಾ ಹಸುರಿನ ಗಿಡಗಳಿವೆ. ಮರಗಳು, ಪೊದೆಗಳು, ಬಿದಿರ ಮೆಳೆಗಳು ಇವೆ.

ಈ ಉದ್ಯಾನವನದ ನಡುವೆ ಜವಾಹರ್ ಬಾಲಭವನ, ಟೆನಿಸ್ ಕ್ರೀಡಾಗಾರ, ಶೇಷಾದ್ರಿ ಸ್ಮಾರಕ ಭವನ, ವೆಂಕಟಪ್ಪ ಚಿತ್ರಶಾಲೆ, ವಸ್ತುಸಂಗ್ರಹಾಲಯ, ಅಠಾರಾ ಕಚೇರಿಗಳಿವೆ. ಈ ವನದಲ್ಲಿ ನಾಲ್ಕು ಸುಂದರವಾದ ಪ್ರತಿಮೆಗಳಿವೆ. ಅವೆಂದರೆ, ರಾಣಿ ವಿಕ್ಟೋರಿಯಾ, ಕಿಂಗ್ ಎಡ್ವರ್ಡ್, ಚಾಮರಾಜ ಒಡೆಯರ್ ಮತ್ತು ಮಾರ್ಕ್ ಕಬ್ಬನ್.

**ಸಾಂಸ್ಕೃತಿಕ ಉತ್ಸವಗಳು**

ಬೆಂಗಳೂರು ಕರಗ ಅತ್ಯಂತ ವಿಜೃಂಭಣೆಯಿಂದ ನಡೆಯುವ ಉತ್ಸವ. ಬೆಂಗಳೂರಿನಲ್ಲಿ ತೋಟವನ್ನು ಅಭಿವೃದ್ಧಿ ಪಡಿಸಲು ಹೈದರನು 'ವಹ್ನಿಕುಲ'ಕ್ಕೆ ಸೇರಿದ ತಮಿಳರನ್ನು ಕರೆತಂದ. ಅವರನ್ನು ತಿಗಳರು ಎಂದು ಇಲ್ಲಿ ಕರೆಯುತ್ತಾರೆ. ಅವರು ನಗರ್ತರ ಪೇಟೆಯಲ್ಲಿ ಧರ್ಮರಾಯನ ಗುಡಿ ಕಟ್ಟಿ ಕರಗವನ್ನು ಆಚರಣೆಗೆ ತಂದರು. ಚೈತ್ರ ಮಾಸದ ಸಪ್ತಮಿಯಿಂದ ಒಂಬತ್ತು ದಿನಗಳ ಕಾಲ ಕರಗ ಉತ್ಸವವನ್ನು ಆಚರಿಸುತ್ತಾರೆ. ಹುಣ್ಣಿಮೆಯ ದಿನ ನಡೆಯುವ ಕರಗ ಉತ್ಸವವನ್ನು ನೋಡಲು ರಾಜ್ಯದ ಮೂಲೆಮೂಲೆಯಿಂದ ಜನರು ಬರುತ್ತಾರೆ. ಜುಮ್ಮಾ ಮಸೀದಿ ಬಳಿ ಕರಗ ಬಂದಾಗ ಮಹಮ್ಮದೀಯರೂ ಕರಗಕ್ಕೆ ಪೂಜೆ ಸಲ್ಲಿಸುತ್ತಾರೆ.

ಕಡಲೇಕಾಯಿ ಪರಿಷೆ ಇಲ್ಲಿ ನಡೆಯುವ ಮತ್ತೊಂದು ಜಾತ್ರೆ. ಬಸವನ ಗುಡಿಯಲ್ಲಿ ಇದು ನಡೆಯುತ್ತದೆ. ನಗರ ಮತ್ತು ಗ್ರಾಮದ ಜನತೆ ಇದರಲ್ಲಿ ಸಂಭ್ರಮದಿಂದ ಪಾಲ್ಗೊಳ್ಳುತ್ತಾರೆ. ಇದಲ್ಲದೆ ಇನ್ನೂ ಅನೇಕ ಜಾತ್ರೆಗಳು, ಕ್ರೈಸ್ತರ ಆರೋಗ್ಯ ದೇವತೆಯ ಆರಾಧನೆ ಇವೆಲ್ಲ ಬೆಂಗಳೂರಲ್ಲಿ ನಡೆಯುತ್ತಿವೆ.

ಈಗ ಬೆಂಗಳೂರು ಆಧುನಿಕ ನಗರವೆನಿಸಿದೆ. ಇದು ತುಂಬಾ ವೇಗವಾಗಿ ಬೆಳೆಯುತ್ತಿದೆ. ದೇಶದ ನಾನಾ ಪ್ರದೇಶದ ಜನ ಇಲ್ಲಿ ಬಂದು ನೆಲೆಸಲು ಇಷ್ಟಪಡುತ್ತಾರೆ. ಬೆಂಗಳೂರಿಗೆ ಬೆಳೆಯುತ್ತಿರುವ ಶಕ್ತಿ ಹುಟ್ಟಿನಿಂದಲೇ ಬಂದಿದೆ. ಅದು ನಾಲ್ಕು ಶತಮಾನಗಳಿಂದ ಕಾಲದ ಏಳು-ಬೀಳು ಲೆಕ್ಕಿಸದೆ ಬೆಳೆಯುತ್ತಲೇ ಇದೆ.





ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು